CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಡಿಸೆಂಬರ್ ೮, ೨೦೦೫ (ಮಾರ್ಗಶಿರ ೧೭, ಶಕ ವರ್ಷ ೧೯೨೭) | ಸಂಚಿಕೆ ೪೮ |
|---|---|---|



## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಸದಲಗಾ ಉಪ ನೋಂದಣಿ ಕಛೇರಿಯನ್ನು ರೂ. 10,40,000/- ಗಳಲ್ಲಿ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ:ಕಟ್ಟಡ:01:05-06 ದಿನಾಂಕ:27.6.2005.
2. ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕ ಆಯುಕ್ತರ ಪತ್ರ ಸಂಖ್ಯೆ: ಬಿಎಲ್‌ಡಿ/6/01-02 ದಿನಾಂಕ: 23.7.2005.

**ಪ್ರಸ್ತಾವನೆ:**

ಉಲ್ಲೇಖ-1ರಲ್ಲಿ ಓದಲಾದ ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳ ದಿನಾಂಕ: 27.6.2005 ರ ಪತ್ರದಲ್ಲಿ ಸದಲಗಾ ಉಪ ನೋಂದಣಿ ಕಛೇರಿಯು ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ಕಟ್ಟಡವು ಬಹಳ ಚಿಕ್ಕದಿದ್ದು, ನೋಂದಣಿಗಾಗಿ ಬರುವ ಸಾರ್ವಜನಿಕರಿಗೆ ಕೂಡಲೂ ಸಹ ಸ್ಥಳವಿಲ್ಲದೆ ಬಹಳ ಅನಾನುಕೂಲವಾಗಿರುವುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಆಡಳಿತಾತ್ಮಕ ದೃಷ್ಟಿಯಿಂದ ಸದರಿ ಉಪನೋಂದಣಾ ಕಛೇರಿಗೆ ಶಾಶ್ವತವಾದ ಕಟ್ಟಡ ಅವಶ್ಯಕತೆಯಿದೆ ಎಂದು ತಿಳಿಸಲಾಗಿದೆ. ಲೋಕೋಪಯೋಗಿ ಇಲಾಖೆಯವರು ಸದರಿ ಕಟ್ಟಡಕ್ಕೆ ಅಂದಾಜು ರೂ.10,40,000/-ಗಳು ವೆಚ್ಚವಾಗುವುದೆಂದು ತಿಳಿಸಿರುತ್ತಾರೆ.

ಉಲ್ಲೇಖ-2 ರಲ್ಲಿ ಓದಲಾದ ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕ ಆಯುಕ್ತರವರ ಪತ್ರ ದಿನಾಂಕ: 23-7-2005 ರಲ್ಲಿ 2005-06 ನೇ ಸಾಲಿನ ಆಯವ್ಯಯದಲ್ಲಿ ಇಲಾಖೆಯ ಕಟ್ಟಡಗಳಿಗಾಗಿ 2.00 ಕೋಟಿ ರೂ.ಗಳು ಮೀಸಲಿಟ್ಟಿದ್ದು ಅದರಲ್ಲಿ ಸದಲಗಾ ಉಪನೋಂದಣಿ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ತಗಲುವ ವೆಚ್ಚ ರೂ. 10,40,000/- ಗಳ ಪ್ರಸ್ತಾವನೆಯನ್ನು ಬೆಳಗಾವಿ ಜಿಲ್ಲಾ ನೋಂದಣಾಧಿಕಾರಿಗಳು ಸಲ್ಲಿಸಿದ್ದು, ಇದಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂ ಇ 543 ಮುನೋಮು 2005, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೆಳಗಾವಿ ಜಿಲ್ಲೆಯ ಸದಲಗಾ ಉಪನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ತಗಲುವ ವೆಚ್ಚ ರೂ.10,40,000/-ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ ಡಿ 1 ಟಿಎಫ್ ಪಿ 96 ದಿನಾಂಕ: 10-7-96 ರನ್ವಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದಿಂದ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1566

### HEALTH AND FAMILY WELFARE SECRETARIAT

**Sub:** Revision of Fee structure of PG Medical Degree and Diploma Course and PG Dental Degree Course conducted in the Government Medical Colleges and Govt., Dental Colleges.

**Read:** 1. G.O. No. HFW 76 MPS 97, dt 20.1.2000

**Preamble:-**

1) The Fee structure of the PG Medical Degree and Diploma Courses and PG Dental Degree Courses offered in the Government Medical Colleges and Government Dental College was prescribed long ago which is as under:

**Government Medical Colleges**

| Sl. No. | PG Degree / Diploma Courses | Fee Structure |
|---|---|---|
| 1. | Pre Clinical | 1,000 |
| 2. | Para Clinical | 1,000 |
| 3. | Clinical | 5,000 |

**Government Dental Colleges**

| Sl. No. | Post Graduate Dental Course | Fee Structure |
|---|---|---|
| 1. | Para Clinical | 1,000 |
| 2. | Clinical | 5,000 |

2) Consequent on the determination of fee structure of PG Medical Degree and Diploma Courses and PG Dental Degree Courses conducted in the Private Medical Colleges and Private Dental college by the committee for fixation of fee structure of Private Professional colleges constituted by Government in compliance with the ruling in Islamic Academy of Education case it is considered expedient to revise the fee structure of the said PG Courses in the Government Medical Colleges and Government Dental College effective from the next academic year 2006-07.

3) Hence the following.

**Government Order No. HFW 22 MPS 2005, Bangalore, Dated 27th October 2005**

4) The Fee structure of the PG Medical Degree and Diploma Courses and PG Dental Degree courses conducted in the Government Medical Colleges and Government Dental Colleges is revised as here under applicable from the next academic year 2006-07.

**Government Medical Colleges**

| Sl. No. | Post Graduate Medical Degree/Diploma Courses | Fee Structure Rs. |
|---|---|---|
| 1. | Pre Clinical | 5,000 (Rupees Five Thousand) |
| 2. | Para Clinical | 10,000 (Rupees Ten Thousand) |
| 3. | Clinical | 50,000 (Rupees Fifty Thousand) |

**Government Dental Colleges**

| Sl. No. | Post Graduate Dental Course | Fee Structure Rs. |
|---|---|---|
| 1. | Para Clinical | 5,000 (Rupees Five Thousand) |
| 2. | Clinical | 50,000 (Rupees Fifty Thousand) |

5. The other fees chargeable shall remain unchanged.

By Order and in the name of the Governor of Karnataka,

**D.V. PRASAD**

P.R. 1567

Secretary to Government,

Health & Family Welfare Department (Medical Education)

**ಇಂಧನ ಸಚಿವಾಲಯ**

**ವಿಷಯ:** ಮೆ: Geneva Power Limited ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 107 ಎನ್‌ಸಿಇ 2001(2) ದಿನಾಂಕ: 19.9.2001.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 107 ಎನ್‌ಸಿಇ 2001 ದಿನಾಂಕ: 27.3.2002.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆ.ಆರ್. ಇ.ಡಿ./06/ಗಿರಿಕಾನಹಳ್ಳ/2005/2074 ದಿನಾಂಕ: 10.11.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ಪಾವನ ಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಮೇಲಿನ ಹುಲುವತ್ತಿ ಗ್ರಾಮದ ಗಿರಿಕಾನಹಳ್ಳ ತೊರೆಗೆ ಅಡ್ಡಲಾಗಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2) ರ ಪತ್ರದಲ್ಲಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಮೆ: ಪಾವನ ಗಂಗಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯಿಂದ ಮೆ: Geneva Power Limited ಕಂಪನಿಯ ಹೆಸರಿನಲ್ಲಿ ಅನುಮತಿಯನ್ನು ನೀಡಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: Geneva Power Limited ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವಿದ್ಯುತ್ ಖರೀದಿ ಒಡಂಬಡಿಕೆಗೆ (PPA) ಸಹಿಯಾಗುವುದು 15 ತಿಂಗಳು ವಿಳಂಬವಾಗಿರುವುದೆಂದು ತಿಳಿಸಿ ಯೋಜನೆಯ ಅನುಷ್ಠಾನಕ್ಕಾಗಿ ಮುಂದಿನ 3 ವರ್ಷಗಳ ಅವಧಿಗೆ ಕಾಲಾವಕಾಶವನ್ನು ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 341 ಎನ್‌ಸಿಇ 2005, ಬೆಂಗಳೂರು, ದಿನಾಂಕ:11ನೇ ನವೆಂಬರ್ 2005**

ಮೆ: Geneva Power Limited ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಮೇಲಿನ ಹುಲುವತ್ತಿ ಗ್ರಾಮದ ಗಿರಿಕಾನಹಳ್ಳ ತೊರೆಗೆ ಅಡ್ಡಲಾಗಿ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಗಿರಿಕಾನಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1570

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ತುಮಕೂರಿನ ಶ್ರೀ ಸಿದ್ದಗಂಗಾ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1. ದಿನಾಂಕ: 26-12-2003 ರ ಸಂ. ಇಡಿ 387 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ: 20-04-2005 ರ ಸಂ. F.SRO/NCTE/B.P.Ed/2005-06/507ರ/ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿನಾಂಕ:26.5.2005ರ ಸಂ.837/2005-06ರ ಅಧ್ಯಕ್ಷರು, ಶ್ರೀ ಸಿದ್ದಗಂಗಾ ವಿದ್ಯಾಸಂಸ್ಥೆ, ತುಮಕೂರು ಇವರ ಪತ್ರ.
4. ದಿನಾಂಕ:24.11.2003 ಸಂ. ಎಸಿಎ-3/ಸಪಸ/ಹೊಕಾಪ್ರ/ಹೊಕೊಪ್ರ/2003-04ರ ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ತುಮಕೂರಿನ ಶ್ರೀ ಸಿದ್ದಗಂಗಾ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:20.4.2005ರ ಆದೇಶದಲ್ಲಿ ಎನ್‌ಸಿಟಿಇಯು ತುಮಕೂರಿನ ಶ್ರೀ ಸಿದ್ದಗಂಗಾ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50(ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ತುಮಕೂರಿನ ಶ್ರೀ ಸಿದ್ದಗಂಗಾ ವಿದ್ಯಾ ಸಂಸ್ಥೆಯ ಅಧ್ಯಕ್ಷರು ಶ್ರೀ ಸಿದ್ದಗಂಗಾ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನಲ್ಲಿ ಬಿ.ಪಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ(4)ರಲ್ಲಿರುವ ಪತ್ರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ತುಮಕೂರಿನ ಶ್ರೀ ಸಿದ್ದಗಂಗಾ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್. ಕೋರ್ಸಿಗೆ 2005-06ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 123 ಯುಆರ್‌ಸಿ 2005, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2005**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತುಮಕೂರಿನ ಶ್ರೀ ಸಿದ್ದಗಂಗಾ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1582

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ವಿಶ್ವವಿದ್ಯಾಲಯಗಳು)

**ವಿಷಯ:** ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಾಂಕನ ಸಂಸ್ಥೆಗೆ ಅಧಿಕಾರಯುಕ್ತ ಸಮಿತಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಡಿ 160 ಯೋಯೋಕ 2005 ದಿನಾಂಕ: 1.4.2005.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಟಿಪ್ಪಣಿ ಸಂಖ್ಯೆ:ಕೆ3/ಶಿಕ್ಷಣ-ಮಾಪನ/1/2005-06 ದಿನಾಂಕ: 23.9.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 1.4.2005ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಾಂಕನ ಸಂಸ್ಥೆಯನ್ನು ಸ್ಥಾಪಿಸಲು ಅನುಮತಿ ನೀಡಲಾಯಿತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:

23.9.2005ರ ತಮ್ಮ ಟಿಪ್ಪಣಿಯಲ್ಲಿ ಸದರೀ ಸಂಸ್ಥೆಗೆ ಅಧಿಕಾರಯುಕ್ತ ಸಮಿತಿಯನ್ನು ರಚಿಸುವಂತೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 337 ಯೋಯೋಕಾ, 2005, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2005**
**(ಇಡಿ - ಸ್ಕೀಮರ (ಯೂನಿಕ್) 2005, ದಿನಾಂಕ: 8-11-2005)**

ಸರ್ಕಾರವು ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಾಂಕನ ಸಂಸ್ಥೆಗೆ ಈ ಕೆಳಕಂಡ ಸದಸ್ಯರನ್ನೊಳಗೊಂಡ ಅಧಿಕಾರಯುಕ್ತ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸುತ್ತದೆ.

| | | | |
|---|---|---|---|
| 1. | ಆಯುಕ್ತರು, ಸಾ.ಶಿ.ಇ. ಬೆಂಗಳೂರು | - | ಅಧ್ಯಕ್ಷರು |
| 2. | ಆಯುಕ್ತರು, ಸಾ.ಶಿ.ಇ. ಧಾರವಾಡ | - | ಉಪಾಧ್ಯಕ್ಷರು |
| 3. | ಅಪರ ಆಯುಕ್ತರು, ಸಾ.ಶಿ.ಇ. ಗುಲ್ಬರ್ಗ | - | ಉಪಾಧ್ಯಕ್ಷರು |
| 4. | ಯೋಜನಾ ನಿರ್ದೇಶಕರು, ಸಾ.ಶಿ.ಅ. | - | ಸದಸ್ಯರು |
| 5. | ನಿರ್ದೇಶಕರು (ಪ್ರಾಥಮಿಕ ಶಿಕ್ಷಣ) | - | ಸದಸ್ಯರು |
| 6. | ನಿರ್ದೇಶಕರು (ಪ್ರೌಢ ಶಿಕ್ಷಣ) | - | ಸದಸ್ಯರು |
| 7. | ನಿರ್ದೇಶಕರು (ಡಿ.ಎಸ್.ಇ.ಆರ್.ಟಿ.) | - | ಸದಸ್ಯರು |
| 8. | ನಿರ್ದೇಶಕರು (ಪರೀಕ್ಷೆಗಳು) ಕ.ಪೌ.ಶಿ.ಪ.ಮಂ | - | ಸದಸ್ಯ ಕಾರ್ಯದರ್ಶಿಗಳು |
| 9. | ಎಜುಕೇಶನ್ ಇನಿಷಿಯೋಟರ್ಸ್ ಸಂಸ್ಥೆಯ ಪ್ರತಿನಿಧಿ | - | ಪದನಿಮಿತ್ತ ಸದಸ್ಯರು |
| 10. | ಅಕ್ಷರ ಫೌಂಡೇಶನ್ ಸಂಸ್ಥೆಯ ಪ್ರತಿನಿಧಿ | - | ಪದನಿಮಿತ್ತ ಸದಸ್ಯರು |
| 11. | ಡಾ: ಗಿರಿಧರ್, ಎ.ಪಿ.ಎಫ್. | - | ಪದನಿಮಿತ್ತ ಸದಸ್ಯರು |
| 12. | ಡಾ: ನಿರಂಜನದಾಸ್, ಪ್ರಾಂಶುಪಾಲರು, ವಿಜಯ ಟೀಚರ್ಸ್ ಕಾಲೇಜು, ಬೆಂಗಳೂರು | - | ಪದನಿಮಿತ್ತ ಸದಸ್ಯರು |
| 13. | ಡಾ: ಶ್ರೀಕಂಠಸ್ವಾಮಿ, ಉಪಪ್ರಾಂಶುಪಾಲರು, ಆರ್.ವಿ. ಶಿಕ್ಷಕರ ಮಹಾ ವಿದ್ಯಾಲಯ, ಬೆಂಗಳೂರು | - | ಪದನಿಮಿತ್ತ ಸದಸ್ಯರು |
| 14. | ಪ್ರಾಂಶುಪಾಲರು, ಡಯಟ್, ಬೆಂ. ಗ್ರಾಮಾಂತರ | - | ಪದನಿಮಿತ್ತ ಸದಸ್ಯರು |
| 15. | ಡಾ: ಪ್ರಸಾದ್, ನಿವೃತ್ತ ಪ್ರಾಂಶುಪಾಲರು ಆರ್.ಸಿ.ಇ. ಮೈಸೂರು. | - | ಪದನಿಮಿತ್ತ ಸದಸ್ಯರು |
| 16. | ಸಿ.ಎ.ಓ. (ಮುಖ್ಯ ಲೆಕ್ಕಾಧಿಕಾರಿಗಳು) | - | ಪದನಿಮಿತ್ತ ಸದಸ್ಯರು |
| 17. | ಐ.ಎಫ್.ಎ. - ಇಡಿ | - | ಪದನಿಮಿತ್ತ ಸದಸ್ಯರು |

ಅ.ಟಿ. ಸಂಖ್ಯೆ:ಇಡಿ 856 ಐಎಫ್ (ಬಿಎ) 2005 ದಿನಾಂಕ:24.10.2005ರಲ್ಲಿ ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

ಪಿ.ಆರ್. 1583

## ಕಂದಾಯ ಸಚಿವಾಲಯ

**ವಿಷಯ:** ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ಬಾಗಲಕೋಟೆ ಇದರ ಒಂದು ವಿಭಾಗ ಕಛೇರಿಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಪತ್ರ ಸಂಖ್ಯೆ.ಸಿಇ/ಬಿಟಿಡಿಎ/ಇಎಸ್‌ಟಿ/2005-06/1023 ದಿನಾಂಕ: 19.7.2005.

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಅಭಿಯಂತರರು ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ ಬಾಗಲಕೋಟೆರವರು ತಿಳಿಸಿರುವಂತೆ ಕೃಷ್ಣಾ ಮೇಲ್ದಂಡೆ ಯೋಜನೆಯ ಪ್ರಮುಖ ಕೆಲಸಗಳು ಈಗಾಗಲೇ ಮುಗಿದಿದ್ದು ಕೇವಲ ಮೆಂಟೆನೆನ್ಸ್ ಮತ್ತು ಅಪರೇಷನಲ್ ಕೆಲಸಗಳು ಉಳಿದಿರುವುದರಿಂದ ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರದ ಕಛೇರಿಯ ವ್ಯಾಪ್ತಿಗೆ ಒಳಪಡುವ ಒಂದು ವಿಭಾಗ ಕಛೇರಿ ಹಾಗೂ ನಾಲ್ಕು ಉಪವಿಭಾಗ ಕಛೇರಿಗಳ ಹುದ್ದೆಗಳನ್ನು ರದ್ದುಗೊಳಿಸಲು ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 145 ಆರ್‌ಇಹೆಚ್, 2005, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2005**

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ ಬಾಗಲಕೋಟೆ ವ್ಯಾಪ್ತಿಗೆ ಒಳಪಡುವ ಕೆಳಕಂಡ ಒಂದನೇ ವಿಭಾಗದ ಎರಡು ಉಪವಿಭಾಗಗಳು 2ನೇ ವಿಭಾಗದಲ್ಲಿ ಎರಡು ಉಪವಿಭಾಗಗಳನ್ನು ರದ್ದುಪಡಿಸುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ. ಆದರೆ ಈ ವಿಭಾಗಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಅವರ ಮಾತೃ ಇಲಾಖೆಗೆ ಹಿಂದಿರುಗಿಸಲು ಆದೇಶಿಸಿದೆ.

**ಕಾರ್ಯಪಾಲಕ ಇಂಜಿನಿಯರ್, ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ವಿಭಾಗ ನಂ.1 ಬಾಗಲಕೋಟೆ**

1) ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ಉಪವಿಭಾಗ ನಂ.1, ಬಾಗಲಕೋಟೆ.
2) ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ಉಪವಿಭಾಗ ನಂ.2, ಬಾಗಲಕೋಟೆ.

**ಕಾರ್ಯಪಾಲಕ ಇಂಜಿನಿಯರ್, ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ವಿಭಾಗ ನಂ.2 ಬಾಗಲಕೋಟೆ**

1) ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ಉಪವಿಭಾಗ ನಂ.5, ಬಾಗಲಕೋಟೆ.

2) ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ಉಪವಿಭಾಗ ನಂ.7, ಬಾಗಲಕೋಟೆ.

ಈ ಆದೇಶವನ್ನು ಜಲಸಂಪನ್ಮೂಲ ಇಲಾಖೆಯ ಅನಧಿಕೃತ ಟಿಪ್ಪಣಿ ನಂ.ಜಸಂಇ:187/ಸೇಎಸು/2005, ದಿನಾಂಕ: 16.9.2005ರ ಸಹಮತಿಯನ್ವಯ ಹಾಗೂ ಆದೇಶ ಸಂಖ್ಯೆ: ಎಫ್‌ಡಿ:1:ಟಿಎಫ್‌ಪಿ:96 ದಿನಾಂಕ:10.7.96ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಜಿ. ಕೌಜಲಗಿ**
ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಪುನರ್ವಸತಿ)

ಪಿ.ಆರ್. 1508

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನ ಶಾಸ್ತ್ರಿ ಇಲಾಖೆ, ಬೆಂಗಳೂರು ಇವರನ್ನು ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತರವರ ಪತ್ರಸಂಖ್ಯೆ:ಲೋಕ್/ಐಎನ್‌ವಿ(ಜಿ)/ ಸಿಟಿ/ಕ್ರೈಂ.22/2005, ದಿನಾಂಕ:28/30.6.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತರವರು ಈ ಪ್ರಕರಣದ ಬಗ್ಗೆ ವಿವರಗಳನ್ನು ನೀಡಿದ್ದಾರೆ. ದಿನಾಂಕ: 18.6.2005 ರಂದು ಶ್ರೀ ಸಿ.ಎಂ. ಮಲ್ಲಿಕಾರ್ಜುನರವರು ಶ್ರೀ ಎಂ.ಗೋಪಾಲಪ್ಪ, ಸಹಾಯಕ ನಿಯಂತ್ರಕರು (ಪ್ರ), ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರನ್ನು ಉದ್ದೇಶಪೂರ್ವಕವಾಗಿ ಹಾವೇರಿ ಜಿಲ್ಲೆಗೆ ವರ್ಗಾವಣೆ ಮಾಡಲು ಪ್ರಸ್ತಾವನೆಯನ್ನು ತಡೆಹಿಡಿಯಲು ಕೋರಿದಾಗ ರೂ.50,000/- ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿ, ಅಷ್ಟು ಹಣವನ್ನು ಏಕಕಾಲದಲ್ಲಿ ಕೊಡಲು ಆಗುವುದಿಲ್ಲವೆಂದು ಮೊದಲನೆಯ ಕಂತಾಗಿ ರೂ. 10,000/- ಗಳನ್ನು ಒತ್ತಾಯಿಸಿರುವುದರಿಂದ, ಈ ಬಗ್ಗೆ ಶ್ರೀ ಎಂ.ರಾಜಣ್ಣ, ಫಿರ್ಯಾದುದಾರರಿಗೆ ಇಷ್ಟವಿಲ್ಲದ್ದರಿಂದ ಲೋಕಾಯುಕ್ತರಿಗೆ ಲಿಖಿತ ದೂರು ಸಲ್ಲಿಸಿರುತ್ತಾರೆಂದು, ಈ ಬಗ್ಗೆ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 13(1)(ಡಿ) ಸಹವಾಚನ ಕಲಂ 13(2) ರಡಿಯಲ್ಲಿ ಮೊಕದ್ದಮೆ ದಾಖಲಿಸಿ ದಿನಾಂಕ : 22.6.2005 ರಂದು ಆರೋಪಿ ಅಧಿಕಾರಿಯಾದ ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು ಇವರನ್ನು ರೂ. 10,000/-ಗಳ ಹಣವನ್ನು ಫಿರ್ಯಾದುದಾರರಿಂದ ಪಡೆಯುತ್ತಿರುವಾಗ ಲಂಚದ ಹಣದೊಡನೆ ಸಿಕ್ಕಿಬಿದ್ದಿದ್ದು, ಆರೋಪಿತ ಅಧಿಕಾರಿಯು ಲಂಚದ ಹಣವನ್ನು ಸ್ವೀಕರಿಸಿರುವುದು ರುಜುವಾತಾಗಿರುತ್ತದೆ. ಆರೋಪಿತ ಅಧಿಕಾರಿಯವರಿಂದ ಲಂಚದ ಹಣವನ್ನು ಯಥಾವತ್ತಾಗಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಫಿರ್ಯಾದುದಾರರು ಆರೋಪಿತ ಅಧಿಕಾರಿ ಲಂಚವನ್ನು ಪಡೆದಿರುವ ಬಗ್ಗೆ ಸ್ಪಷ್ಟವಾಗಿ ನುಡಿದಿರುತ್ತಾರೆ. ಆರೋಪಿತ ಅಧಿಕಾರಿಯನ್ನು ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದ್ದು, ಪ್ರಕರಣದ ತನಿಖೆಯು ಮುಂದುವರಿದಿರುವುದಾಗಿ ವರದಿ ಮಾಡಿರುತ್ತಾರೆ ಆಪಾದಿತ ಅಧಿಕಾರಿಯ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟುಮಾಡುವ, ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಮತ್ತು ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ, ಇವರನ್ನು ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲು ಪರಿಗಣಿಸಬೇಕಾಗಿ ಲೋಕಾಯುಕ್ತರ ಕಛೇರಿಯವರು ತಿಳಿಸಿರುತ್ತಾರೆ.

ಈ ಪ್ರಕರಣವನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 54 ಕಾಮಾಸೇ 2005, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಸಿ. ಎಂ.ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)ರ ಉಪನಿಯಮ (1)ರ ಕಲಂ (ಎ) ಮತ್ತು (ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅವರ ವಿರುದ್ದದ ಲೋಕಾಯುಕ್ತ ಪ್ರಕರಣದ ವಿಚಾರಣೆಯನ್ನು ಬಾಕಿ ಇರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಶ್ರೀ ಸಿ.ಎಂ.ಮಲ್ಲಿಕಾರ್ಜುನರವರು ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರಸ್ಥಾನವನ್ನು ಬಿಡುವಂತಿಲ್ಲ.

ಶ್ರೀ ಸಿ.ಎಂ.ಮಲ್ಲಿಕಾರ್ಜುನ ಇವರು ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ, ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 1584

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ರಾಜ್ಯದ ಸಕ್ಕರೆ ಕಾರ್ಖಾನೆಗಳು ರಫ್ತು ಮಾಡಿದ ಸಕ್ಕರೆಗೆ ಪ್ರತಿ ಮೆ.ಟನ್‌ಗೆ ರೂ 1,000ಗಳಂತೆ ರಫ್ತು ಸಹಾಯಧನ ನೀಡುವ ಬಗ್ಗೆ-ಹಣ ಬಿಡುಗಡೆ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ: ಸಿಐ: 231 ಎಸ್ ಜಿ ಎಫ್ 03 ದಿ: 10.09.03
2. ಸರ್ಕಾರದ ಆದೇಶ ಸಂಖ್ಯೆ : ಸಿಐ:231 ಎಸ್ ಜಿ ಎಫ್ 03 (2) ದಿನಾಂಕ:15.12.04.
3 ಅನಧಿಕೃತ ಟಿಪ್ಪಣಿ ಸಂಖ್ಯೆ :ಎಫ್ ಡಿ 805 ವೆಚ್ಚ. 1/2005 ದಿ:9.9.2005

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2002-03ನೇ ಸಾಲಿನಲ್ಲಿ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ಕಬ್ಬು ಖರೀದಿ ಹಣವನ್ನು ಬಾಕಿ ಉಳಿಸಿಕೊಂಡಿದ್ದು, ಸದರಿ ಬಾಕಿ ಹಣ ಪಾವತಿಸಲು ಸಹಾಯಕವಾಗಲು

ಕಾರ್ಖಾನೆಗಳು ರಫ್ತು ಮಾಡುವ ಪ್ರತಿ ಮೆಟ್ರಿಕ್ ಟನ್ ಸಕ್ಕರೆಗೆ ರೂ.1000/- ಗಳಂತೆ ರಫ್ತು ಸಹಾಯಧನವನ್ನು ನೀಡಲು ಹಾಗೂ ಈ ರಫ್ತು ಸಹಾಯಧನ ಮೊತ್ತವನ್ನು ರೂ.20.00 ಕೋಟಿಗಳಿಗೆ ಮಿತಿಗೊಳಿಸಿ ಕೆಲವು ಷರತ್ತುಗಳನ್ನು ವಿಧಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳು ದಿನಾಂಕ: 10.9.2003 ರಿಂದ 31.3.2004ರ ಅವಧಿಯಲ್ಲಿ ಸಕ್ಕರೆಯನ್ನು ರಫ್ತು ಮಾಡಿದ್ದು ದಿನಾಂಕ:10.9.03ರ ಸರ್ಕಾರದ ಆದೇಶದ ಮೇರೆಗೆ ಈ ಕಾರ್ಖಾನೆಗಳಿಗೆ 363.85 ಲಕ್ಷ ರೂಗಳ ಸಹಾಯ ಧನವನ್ನು ಬಿಡುಗಡೆಗೆ ಆದೇಶಿಸಲಾಗಿತ್ತು.

| | | |
|---|---|---|
| 1. | ಗೋದಾವರಿ ಶುಗರ್ಸ್ ಸಮೀರವಾಡಿ, ಬಾಗಲಕೋಟೆ ಜಿಲ್ಲೆ | 98.62 |
| 2. | ಜೆಮ್ ಶುಗರ್ಸ್ (ಲಿ) ಕುಂದರಗಿ, ಬಾಗಲಕೋಟೆ ಜಿಲ್ಲೆ | 130.13 |
| 3. | ಶ್ರೀ ಚಾಮುಂಡೇಶ್ವರಿ ಶುಗರ್ಸ್ (ಲಿ) ಮದ್ದೂರು ತಾಲ್ಲೂಕು | 77.50 |
| 4. | ಉಗಾರ್ ಶುಗರ್ಸ್ (ಲಿ) ಉಗಾರ್ ಖುರ್ದ್, ಬೆಳಗಾಂ ಜಿಲ್ಲೆ | 11.00 |
| 5. | ಭಾಗ್ಯಲಕ್ಷ್ಮೀ ಸಸಕಾ, ಬೆಳಗಾಂ ಜಿಲ್ಲೆ | 46.60 |
| | **ಒಟ್ಟು** | **363.85** |

ಉಲ್ಲೇಖ (2)ರ ಆದೇಶದಲ್ಲಿ ಮಂಜೂರಾದ ಹಣವನ್ನು ದಿನಾಂಕ: 31.3.2005ರ ಅಂತ್ಯದೊಳಗೆ ಬಿಡುಗಡೆಗೊಳಿಸಲು ಸಾಧ್ಯವಾಗದ ಕಾರಣ 2005-06ನೇ ಸಾಲಿನ ಪೂರಕ ಅನುದಾನದಲ್ಲಿ (ಮೊದಲನೆ ಕಂತು) ಒದಗಿಸಿದ್ದು ಈ ಹಣ ಬಿಡುಗಡೆಗೆ ಮುನ್ನ ಕಾರ್ಖಾನೆಗಳು ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿದ್ದಲ್ಲಿ ಈ ಬಾಕಿಗೆ ಬಿಡುಗಡೆ ಮಾಡುವ ರಫ್ತು ಸಹಾಯಧನವನ್ನು ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ಹಣವನ್ನು ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಉಲ್ಲೇಖ (3)ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ. ಅದರಂತೆ ಶ್ರೀ ಚಾಮುಂಡೇಶ್ವರಿ ಶುಗರ್ಸ್ (ಲಿ) ಕೆ.ಎಂ. ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ರವರು ಹಾಗೂ ಉಗಾರ್ ಶುಗರ್ಸ್ (ಲಿ), ಉಗಾರ್ ಖುರ್ದ್, ಬೆಳಗಾಂ ಜಿಲ್ಲೆ ರವರು ಸರ್ಕಾರಕ್ಕೆ ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಗೆ ಈ ಕಾರ್ಖಾನೆಗಳಿಗೆ ಮಂಜೂರಾಗಿದ್ದ 77.50 ಲಕ್ಷ ಮತ್ತು 11.00 ಲಕ್ಷ ರೂಗಳನ್ನು ಹೊಂದಾಣಿಕೆ ಮಾಡಿಕೊಳ್ಳಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 231 ಎಸ್‌ಜಿಎಫ್ 2003 (3), ದಿನಾಂಕ: 11ನೇ ನವೆಂಬರ್ 2005**

ರಾಜ್ಯದ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳು ಸಕ್ಕರೆ ರಫ್ತು ಮಾಡಿದ್ದು ಉಲ್ಲೇಖ (1)ರಲ್ಲಿನ ದಿನಾಂಕ: 10.9.03 ಸರ್ಕಾರದ ಆದೇಶ ಮೇರೆಗೆ ರಫ್ತು ಸಹಾಯಧನ 88.50 ಲಕ್ಷ ರೂಗಳನ್ನು (ಎಂಬತ್ತೆಂಟು ಲಕ್ಷ ಐವತ್ತು ಸಾವಿರ ರೂಗಳನ್ನು) ಬಿಡುಗಡೆ ಮಾಡಲಾಗಿದೆ. ಹಾಗೂ ಬಿಡುಗಡೆಯಾದ ಪೂರ್ಣ ಮೊತ್ತವನ್ನು ಕಾರ್ಖಾನೆಗಳು ಸರ್ಕಾರಕ್ಕೆ ಪಾವತಿಸಬೇಕಾದ ಖರೀದಿ ತೆರಿಗೆ ಬಾಕಿಗೆ ಹೊಂದಾಣಿಕೆ ಮಾಡಿಕೊಳ್ಳಲಾಗಿದೆ.

| | | |
|---|---|---|
| 1. | ಶ್ರೀ ಚಾಮುಂಡೇಶ್ವರಿ ಶುಗರ್ಸ್ (ಲಿ) ಕೆ.ಎಂ. ದೊಡ್ಡಿ ಮದ್ದೂರು ತಾಲ್ಲೂಕು ಮಂಡ್ಯ ಜಿಲ್ಲೆ | 77.50 ಲಕ್ಷ ರೂಗಳು |
| 2. | ಉಗಾರ್ ಶುಗರ್ಸ್ (ಲಿ) ಉಗಾರ್ ಖುರ್ದ್, ಬೆಳಗಾಂ ಜಿಲ್ಲೆ | 11.00 ಲಕ್ಷ ರೂಗಳು |
| | **ಒಟ್ಟು** | **88.50 ಲಕ್ಷ ರೂಗಳು** |

ಈ ಹಣವನ್ನು ಲೆಕ್ಕ ಶೀರ್ಷಿಕೆ 2852-08-201-0-06-106 (ಎನ್‌ಪಿ) ಸಹಾಯಧನ ಪೂರಕ ಅಂದಾಜು 2005-06 (ಮೊದಲನೆ ಕಂತು)ರಲ್ಲಿ ಒದಗಿಸಲಾಗಿದೆ. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ರವರು ಖಜಾನೆಯಿಂದ ಹಣ ಸೆಳೆಯುವ ಅಧಿಕಾರಿಯಾಗಿದ್ದು ಸದರಿಯವರು ಹಣ ಬಿಡುಗಡೆಗೆ ಹಾಗೂ ಸರ್ಕಾರಕ್ಕೆ ಪಾವತಿಸಬೇಕಾದ ಖರೀದಿ ತೆರಿಗೆಯನ್ನು "ಲೆಕ್ಕ ಶೀರ್ಷಿಕೆ-0040-00-102-0-01-ಸೇಲ್ ಟ್ಯಾಕ್ಸ್" ಲೆಕ್ಕಕ್ಕೆ ಹೊಂದಾಣಿಕೆ ಮಾಡುವುದು.

ಈ ಹೊಂದಾಣಿಕೆಯನ್ನು ಮಹಾಲೇಖಪಾಲರು ಲೆಕ್ಕ ಮತ್ತು ರಹದಾರಿರವರು ರಾಜ್ಯದ 2005-06ನೇ ಸಾಲಿನ ಲೆಕ್ಕಗಳಲ್ಲಿ ಹೊಂದಾಣಿಕೆಯನ್ನು ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 805 ವೆಚ್ಚ-1/2005 ದಿನಾಂಕ: 9.9.2005ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1585

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಬೆಂಗಳೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಉಪ ನಿರ್ದೇಶಕರ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 90 ಕೆಎಂಯು 2003 ದಿನಾಂಕ : 5.9.2003.
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ:ಡಿಎಎಂ: ಇಎಸ್‌ಟಿ-1:78 2004-05 ದಿನಾಂಕ :27.9.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ, ಬೆಂಗಳೂರಿನಲ್ಲಿರುವ ಸಹಾಯಕ ನಿರ್ದೇಶಕರ (ವಸ್ತು ಸಂಗ್ರಹಾಲಯ ಅಭಿವೃದ್ಧಿ) (ತಾತ್ಕಾಲಿಕ ಹುದ್ದೆ) ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷಕ್ಕೆ ಉಪನಿರ್ದೇಶಕರ ಹುದ್ದೆಗೆ ಉನ್ನತೀಕರಿಸಿ ಮುಂದುವರಿಸಲಾಗಿದೆ. ಮೇಲೆ ಓದಲಾದ ಕ್ರಮಸಂಖ್ಯೆ (2) ರಲ್ಲಿನ ಪತ್ರದಲ್ಲಿ ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಮೈಸೂರು, ಇವರು ಉನ್ನತೀಕರಿಸಲಾದ ಉಪನಿರ್ದೇಶಕರ ಹುದ್ದೆಯನ್ನು ದಿನಾಂಕ: 5.9.2005 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 240 ಕೆಎಂಯು 2005, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಬೆಂಗಳೂರಿನಲ್ಲಿರುವ ಉನ್ನತೀಕರಿಸಲಾದ ಉಪನಿರ್ದೇಶಕರ ಹುದ್ದೆಯನ್ನು ದಿನಾಂಕ: 5.9.2005ರಿಂದ ಮತ್ತೆ ಒಂದು ವರ್ಷಕ್ಕೆ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ ಡಿ 1 ಟಿಎಫ್ ಪಿ 96, ದಿನಾಂಕ: 10.7.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1586 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ, ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 67 ಎಸ್‌ಇಎನ್2005 ದಿನಾಂಕ: 08.08.2005.
2. ಶ್ರೀ ಪಿ. ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರ ವರದಿ ದಿನಾಂಕ: 17.10.2005.

**ಪ್ರಸ್ತಾವನೆ:**

ಶ್ರೀ ಸಿ. ಕೃಷ್ಣಮೂರ್ತಿ, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ರಾಜಕೀಯ ವಿಶ್ರಾಂತಿ ವೇತನ) ಇವರು ಕಂದಾಯ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯದೇ, ಸಹಮತಿಯನ್ನು ಪಡೆಯಲಾಗಿದೆಯೆಂದು ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 15 ಎಂಆರ್‌ಆರ್ 97 ದಿನಾಂಕ 17.7.2000ನ್ನು ಹೊರಡಿಸಿ ಭೂ ದಾಖಲೆಗಳ ನಿರ್ದೇಶಕರಿಗೆ ರೂ.114.59 ಲಕ್ಷ ಹಣವನ್ನು ಬಿಡುಗಡೆಗೊಳಿಸಿರುವ ದುರ್ನಡತೆಯ ಆರೋಪಗಳಿಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ:8.8.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಪಿ. ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ:17.10.2005ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

### ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 67 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2005

ಸರ್ಕಾರವು ಶ್ರೀ ಪಿ. ಗೋಪಾಲಕೃಷ್ಣ , ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ: 24.04.1998 ರನ್ವಯ ರೂ. 5000/. (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ :ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ ರೂ. 1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ '2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1593 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

**ವಿಷಯ:** ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಅಸ್ತಿತ್ವದಲ್ಲಿರುವ ಕಾರ್ಯದರ್ಶಿ-2 ಹುದ್ದೆಗೆ ಹೊಂದಿಕೊಂಡಂತೆ ಗ್ರೂಪ್ 'ಡಿ' ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಸಸಿವಿ 2005, ದಿನಾಂಕ: 16.02.2005.
2. ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಆಡಳಿತ -3)ರವರ ಅ.ಟಿ.ಸಂಖ್ಯೆ :ಸಿಆಸುಇ 294 ಸಿಸೇನಿ 2005 ದಿನಾಂಕ: 12.9.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಕಾರ್ಯದರ್ಶಿ-2 ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಮುಖ್ಯಮಂತ್ರಿಯವರ ಕಾರ್ಯದರ್ಶಿ-2 ಹುದ್ದೆಗೆ ಒಂದು ಗ್ರೂಪ್ 'ಡಿ'ಹುದ್ದೆಯನ್ನು ಸೃಜಿಸಲು ಪ್ರಸ್ತಾಪಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 58 ಸಸಿವಿ 2005, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2005

ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಸೃಜಿಸಲಾಗಿರುವ ಕಾರ್ಯದರ್ಶಿ-2ರ ಆಪ್ತ ಶಾಖೆಗೆ ಒಂದು ಗ್ರೂಫ್ 'ಡಿ' ಹುದ್ದೆಯನ್ನು ಮುಖ್ಯಮಂತ್ರಿಯವರ ಪದಾವಧಿಯವರೆಗೆ ಅಥವಾ ಒಂದು ವರ್ಷದ ಅವಧಿಯವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1781/ ವೆಚ್ಚ - 5/ 2005, ದಿನಾಂಕ: 25.10.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1595 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕು ಹಿರೇಮಾಗನೂರು ಬ್ರಿಡ್ಜ್ ಕಂ ಬ್ಯಾರೇಜ್ ಕೂಡುರಸ್ತೆ ನಿರ್ಮಾಣಕ್ಕೆ ಭೂಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಂಭಾವ್ಯ ವೆಚ್ಚ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 19.03.2005ರ ಪತ್ರ ಸಂಮುಇಂ.ಸನೀ(ಉ)ವ:ಭೂಸ್ವಾಪ್ರ/04-05.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:19.03.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕು ಹಿರೇಮಾಗನೂರು ಬ್ರಿಡ್ಜ್ ಕಂ ಬ್ಯಾರೇಜ್‌ನ ಕೂಡುರಸ್ತೆಗಾಗಿ ಹಿರೇಮಾಗನೂರು ಗ್ರಾಮದ ಸರ್ವೆ ನಂ.127/1, 127/2. 128/2 126/2, 140/2ಅ+2ಬ+2ಕ, 140/3, 141/1+ 2, 3/1, 3/2, 3/3,4/1 ರಲ್ಲಿನ ಒಟ್ಟು 3.33 ಎಕರೆ ಜಮೀನು ಭೂಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆಯನ್ವಯ ದಿನಾಂಕ : 02.8.2004ರಲ್ಲಿ 4(1) ಅಧಿಸೂಚನೆ ಹೊರಡಿಸಿದ್ದು, ಎಕರೆ ಒಂದಕ್ಕೆ ರೂ.50.000/-ರಂತೆ ಹಾಗೂ ಇತರ ಸೌಲಭ್ಯಗಳು ಸೇರಿ ರೂ.2,98,050/- ಗಳಾಗಿದ್ದು, ಶೇ.50 ರಷ್ಟು ಅಂದರೆ, ರೂ. 1,49,025/- ಗಳನ್ನು ಠೇವಣಿ ಮಾಡಲಾಗಿದೆ. ಅದರಂತೆ ಉಳಿದ ಮೊತ್ತ ರೂ.1,49,025/- ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 77 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2005**

ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕು ಹಿರೇಮಾಗನೂರು ಗ್ರಾಮದ ಬ್ರಿಡ್ಜ್ ಕಂ ಬ್ಯಾರೇಜ್‌ನ ಕೂಡುರಸ್ತೆಗಾಗಿ ಒಟ್ಟು ಸಂಭಾವ್ಯ ವೆಚ್ಚದಲ್ಲಿ ಪಾವತಿಸಬೇಕಾದ ಮೊತ್ತ ಅಂದರೆ ರೂ. 1,49,025/- ಗಳನ್ನು (ಒಂದು ಲಕ್ಷದ ನಲವತ್ತೊಂಭತ್ತು ಸಾವಿರದ ಇಪ್ಪತ್ತೈದು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಚಾರ ತಃಖ್ತೆಯನ್ನು ದೃಢೀಕರಿಸಿಕೊಳ್ಳತಕ್ಕದ್ದು ಮತ್ತು ಎರಡನೇ ಸಲ ಹಣ ಪಾವತಿ ಆಗದಂತೆ ನೋಡಿಕೊಳ್ಳತಕ್ಕದ್ದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00- ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 1ಟಿಎಫ್‌ಪಿ 2003 ದಿನಾಂಕ: 12.06.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1597 **ಎಂ.ಎನ್. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಸಹಯೋಗದೊಂದಿಗೆ ಟಿಪ್ಪು ಸುಲ್ತಾನ್ ರಾಷ್ಟ್ರೀಯ ವಿಚಾರ ಸಂಕಿರಣವನ್ನು ಆಯೋಜಿಸುವ ಬಗ್ಗೆ.

**ಓದಲಾಗಿದೆ:**
1. ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ 1/16/2005-06, ದಿನಾಂಕ:26.9.2005.
2. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 63 ಸ್ವೀಮರ 2005 ಬೆಂಗಳೂರು, ದಿನಾಂಕ 7.6.2005.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯ ಇವರ ಪತ್ರದಲ್ಲಿ ಟಿಪ್ಪು ಸುಲ್ತಾನ್ ವ್ಯಕ್ತಿತ್ವ ಮತ್ತು ಇತಿಹಾಸ ಕುರಿತು 3 ದಿವಸಗಳ ರಾಷ್ಟ್ರೀಯ ವಿಚಾರ ಸಂಕೀರಣವನ್ನು 2005 ನವೆಂಬರ್ 18 ರಿಂದ 20 ರ ವರೆಗೆ ಮೈಸೂರಿನಲ್ಲಿ ಇತಿಹಾಸ ಅಧ್ಯಯನದ ವಿಭಾಗ, ಮೈಸೂರು ವಿಶ್ವವಿದ್ಯಾಲಯ ಇವರ ಸಹಯೋಗದೊಂದಿಗೆ ನಡೆಸಲು ಉದ್ದೇಶಿಸಿ, ರೂ. 1.00/- ಲಕ್ಷ ಅನುದಾನವನ್ನು ಈ ವಿಚಾರ ಸಂಕೀರಣಕ್ಕೆ ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2) ರ ಸರ್ಕಾರಿ ಆದೇಶದಲ್ಲಿ ಟಿಪ್ಪು ಸುಲ್ತಾನ್ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರದ ಸ್ಥಾಪನೆಗಾಗಿ ವಿಚಾರ ಸಂಕೀರಣ ಸಭೆ ಮತ್ತು ಸಮಾರಂಭಗಳಿಗಾಗಿ ರೂ.1.00/-ಲಕ್ಷವನ್ನು ನಿಗದಿಪಡಿಸಿಕೊಳ್ಳಲಾಗಿದೆ. ಹಾಗೂ ಈ ಮೊತ್ತವನ್ನು ಲೆಕ್ಕಶೀರ್ಷಿಕೆ 2205-00-103-0-20 (ಯೋಜನೆ)-059 ಇತರ ಖರ್ಚು ಅಡಿಯಲ್ಲಿ ಕಲ್ಪಿಸಿಕೊಳ್ಳಲಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 234 ಕೆಎಂಯು 2005, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ನಿರ್ದೇಶನಾಲಯವು 2005ರ ನವೆಂಬರ್ ಮಾಹೆಯಲ್ಲಿ ಆಚರಿಸಲು ಹಮ್ಮಿಕ್ಕೊಂಡಿರುವ ಟಿಪ್ಪು ಸುಲ್ತಾನ್ ರಾಷ್ಟ್ರೀಯ ವಿಚಾರ ಸಂಕೀರಣಕ್ಕೆ ರೂ.1.00/ -ಲಕ್ಷ (ರೂಪಾಯಿ ಒಂದು ಲಕ್ಷ ಮಾತ್ರ) ವನ್ನು ವಿಚಾರ ಸಂಕೀರಣದ ಉಳಿದ ಖರ್ಚನ್ನು ಛೇರ್‌ಮನ್ ಇತಿಹಾಸ ಅಧ್ಯಯನ ವಿಭಾಗ ಮಾನಸಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ. ಮೈಸೂರು, ಇವರು ಭರಿಸಬೇಕೆಂಬ ಷರತ್ತಿಗೊಳಪಟ್ಟು ಛೇರ್ಮನ್, ಇತಿಹಾಸ ಅಧ್ಯಯನ ವಿಭಾಗ ಮಾನಸಗಂಗೋತ್ರಿ, ಮೈಸೂರು ಇವರಿಗೆ ನೀಡಲು, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ನಿರ್ದೇಶನಾಲಯ, ಮೈಸೂರು ಇವರಿಗೆ ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ: 2205-00-103-0-20-059(ಯೋಜನೆ) ಇತರ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ :10-7-96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ವಿಶಾಲಾಕ್ಷಮ್ಮ**

ಪಿ.ಆರ್. 1601 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** 2005ರ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಪ್ರಾಚ್ಯವಸ್ತು ಹಾಗೂ ಪರಂಪರೆ ಸಂರಕ್ಷಣೆ ಕುರಿತ ಛಾಯಾಚಿತ್ರ ಪ್ರದರ್ಶನ ಏರ್ಪಡಿಸಲು ನಿಗದಿತ ಅನುದಾನ 2.00 ಲಕ್ಷವನ್ನು ವೆಚ್ಚ ಮಾಡಲು ಮಂಜೂರಾತಿ.

**ಓದಲಾಗಿದೆ:** 1] ಸರ್ಕಾರಿ ಆದೇಶ ಸಂಖ್ಯೆ: ಸಂಕಇ 63 ಸ್ವೀಮರ 2005, ಬೆಂಗಳೂರು ದಿನಾಂಕ: 7.6.2005.

2] ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ನಿರ್ದೇಶಕರ ಪತ್ರ ಕ್ರಮಾಂಕ: ಡಿಎಎಂ:ಎಸಿಟಿ/I; 17/2005-06 ದಿನಾಂಕ:26.9.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ 2005-06ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ವಸ್ತು ಪ್ರದರ್ಶನ ಉದ್ದೇಶಕ್ಕಾಗಿ ಯೋಜನಾ ಅನುದಾನ ರೂ.2.00 ಲಕ್ಷಗಳನ್ನು ನಿಗದಿ ಪಡಿಸಿಕೊಂಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರು ಮೈಸೂರು ದಸರಾ ವಸ್ತು ಪ್ರದರ್ಶನ 2005ರಲ್ಲಿ ದಸರಾ ವಸ್ತು ಪ್ರದರ್ಶನ ಪ್ರಾಧಿಕಾರದ ಆವರಣದ ಕನ್ನಡ ಕಾರಂಜಿಯಲ್ಲಿ ಪ್ರಾಚ್ಯವಸ್ತು ಮತ್ತು ಪರಂಪರೆ ಸಂರಕ್ಷಣೆ ಕುರಿತ ಛಾಯಾಚಿತ್ರ ಪ್ರದರ್ಶನ ಏರ್ಪಡಿಸಲು ಮಳಿಗೆಗಳ ಬಾಡಿಗೆ ವಿದ್ಯುಚ್ಛಕ್ತಿ ಶುಲ್ಕ, ಇಲಾಖಾ ಪ್ರಕಟಣೆಗಳ ಮಾರಾಟದ ಮಳಿಗೆಯ ಸಿದ್ದತೆ, ಸ್ಮಾರಕಗಳ ಛಾಯಾಚಿತ್ರ ಪ್ರತಿಗಳು, ಲ್ಯಾಮಿನೇಷನ್ ಖರ್ಚು, ಪ್ರದರ್ಶನದ ಮಳಿಗೆಯನ್ನು ಸುಸಜ್ಜಿತಗೊಳಿಸುವುದು ಇತ್ಯಾದಿಗೆ ಸಂಬಂಧಿಸಿದಂತೆ ಒಟ್ಟಾರೆ ರೂ.2.00 ಲಕ್ಷವೆಂದು ಅಂದಾಜು ಮಾಡಲಾಗಿದ್ದು ಲೆಕ್ಕ ಶೀರ್ಷಿಕೆ 2205-00-103-0-01 (ಯೋಜನೆ) 059 ಇತರ ಖರ್ಚು ಅಡಿಯಲ್ಲಿ ರೂ.2.00 ಲಕ್ಷವನ್ನು ವೆಚ್ಚ ಮಾಡಲು ಸರ್ಕಾರದ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 233 ಕೆಎಂಯು 2005, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯವು 2005ರಲ್ಲಿ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಪ್ರಾಚ್ಯವಸ್ತು ಮತ್ತು ಪರಂಪರೆ ಸಂರಕ್ಷಣೆ ಕುರಿತ ಛಾಯಾಚಿತ್ರ ಪ್ರದರ್ಶನ ಏರ್ಪಡಿಸಿದ್ದ ಕಾರ್ಯಕ್ಕೆ ರೂ.2.00/- ಲಕ್ಷ (ರೂಪಾಯಿ ಎರಡು ಲಕ್ಷಗಳು ಮಾತ್ರ) ಗಳಿಗೆ ಮಂಜೂರಾತಿ ನೀಡಿ ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರಿಗೆ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-01(ಯೋಜನೆ) 059 ಇತರೆ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1550

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:-** 2005-06ನೇ ಸಾಲಿನಿಂದ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಸೆಮಿಸ್ಟರ್ ಮಾದರಿಯನ್ನು ಮಾರ್ಪಾಡು ಮಾಡುವ ವಿಚಾರ.

**ಓದಲಾಗಿದೆ:-** 1. ದಿ:16.2.2004ರ ಆದೇಶ ಸಂ:ಇ ಡಿ 24 ಡಿಜಿಒ 2004

2. ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇ ಲಾಖೆ, ಅವರ ಕಚೇರಿಯ ದಿ:24.5.2005 ರ ಪತ್ರ ಸಂ: ಎಸ್.ಇ .ಇ .ಯು:ತ್ರೈಪನ್ಯೂಸ:3:2005-06

**ಪ್ರಸ್ತಾವನೆ:-**

ಮೇಲೆ ಕಾಣಿಸಿದ ಕ್ರಮ ಸಂಖ್ಯೆ(1)ರ ದಿನಾಂಕ:16.2.2004 ರ ಆದೇಶದಲ್ಲಿ 2004-05 ನೇ ಸಾಲಿನ ಶೈಕ್ಷಣಿಕ ವರ್ಷದಿಂದ ತ್ರೈಮಾಸಿಕ ಶಿಕ್ಷಣ ಪದ್ಧತಿಯು ಅನುಷ್ಠಾನಕ್ಕೆ ಬಂದಿದ್ದು, ಕ್ರಮ ಸಂ:(2)ರ ದಿನಾಂಕ:24.5.2005 ರ ಪತ್ರದಲ್ಲಿ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇ ಲಾಖೆಯ ನಿರ್ದೇಶಕರು ಈ ಪದ್ಧತಿ ಕುರಿತು ರಾಜ್ಯಾದ್ಯಂತ ಸಾಕಷ್ಟು ಚರ್ಚೆಗಳಾಗಿದ್ದು, ರಾಜ್ಯದ ಹೆಚ್ಚಿನ ಸಂಖ್ಯೆಯ ಅಧಿಕಾರಿಗಳು, ಮುಖ್ಯ ಶಿಕ್ಷಕರು, ಶಿಕ್ಷಕರು, ಪೋಷಕರು ಹಾಗೂ ಶಿಕ್ಷಣ ತಜ್ಞರು, ಪತ್ರಿಕೆ, ಸಂದರ್ಶನ, ತರಬೇತಿ ಕಾರ್ಯಾಗಾರ ಗಳು ರೇಡಿಯೋ ಮತ್ತು ದೂರದರ್ಶನ ಸಂವಾದ ಕಾರ್ಯಕ್ರಮಗಳು ಹಾಗೂ ಉಪಗ್ರಹ ಆಧಾರಿತ ತರಬೇತಿ ಕಾರ್ಯಕ್ರಮಗಳಲ್ಲಿ ಮೂಡಿಬಂದ ಸಂದೇಹಗಳು ಮತ್ತು ಸಲಹೆಗಳನ್ನು ಆಧರಿಸಿ 2005-06ನೇ ಸಾಲಿಗೆ ತ್ರೈಮಾಸಿಕ ಶಿಕ್ಷಣ ಪದ್ಧತಿಯಲ್ಲಿರುವ ನ್ಯೂನತೆಗಳನ್ನು ಹೋಗಲಾಡಿಸಲು ಸರ್ಕಾರದ ನಿರ್ದೇಶನದಂತೆ ತಮ್ಮ ಅಧ್ಯಕ್ಷತೆಯಲ್ಲಿ ರಚಿಸಲಾದ ತಜ್ಞರ ಸಮಿತಿಯಲ್ಲಿ ದಿನಾಂಕ:6.1.2005 ರಿಂದ ಪ್ರತಿ ಮಂಗಳವಾರ ದಿ:23.3.2005 ರವರೆಗೆ ಚರ್ಚಿಸಿ ಕೆಲವು ಮಾರ್ಪಾಡುಗಳನ್ನು ಮಾಡಿದ್ದು, ಅವುಗಳನ್ನು ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರ ಗಮನಕ್ಕೆ ತಂದು ಸಚಿವರ ಅನುಮೋದನೆಯೊಂದಿಗೆ ತ್ರೈಮಾಸಿಕ ಪದ್ಧತಿಯಲ್ಲಿ 2005-06 ರಿಂದ ಮಾರ್ಪಾಡುಗಳನ್ನು ಮಾಡಲಾಗಿದ್ದು, ಈ ಬಗ್ಗೆ ಆದೇಶವನ್ನು ಹೊರಡಿಸಲು ನಿರ್ದೇಶಕರು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ:ಇ ಡಿ 61 ಡಿಜಿಒ 2005, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ 2005-06 ನೇ ಸಾಲಿನಿಂದ ತ್ರೈಮಾಸಿಕ ಪದ್ಧತಿಯಲ್ಲಿ ಈ ಕೆಳಕಂಡ ಮಾರ್ಪಾಡು ಗಳನ್ನು ಮಾಡಲಾಗಿದೆ.

1. 5ನೇ ತರಗತಿಯ ಪಠ್ಯಪುಸ್ತಕಗಳನ್ನು ತ್ರೈಮಾಸಿಕ ಪದ್ಧತಿಗೆ ಅನುಗುಣವಾಗಿ ಪಠ್ಯಪುಸ್ತಕಗಳನ್ನು ಪುನರ್ ರಚನೆ ಮಾಡಿ ಪ್ರತಿ ತ್ರೈಮಾಸಿಕಕ್ಕೆ ಭಾಷೆಗಳ ಪುಸ್ತಕ-1, ಕೋರ್ ಅಂಶಗಳ ಪುಸ್ತಕ-1 ಮಾತ್ರ ಒಟ್ಟು 2 ಪುಸ್ತಕಗಳಿರುವುವು. ಪರಿಸರ ಅಧ್ಯಯನವು ಪ್ರತ್ಯೇಕ ಅಂಶವಾಗಿ ಬೋಧಿಸಲ್ಪಡುವುದು.
2. ತ್ರೈಮಾಸಿಕ ಅವಧಿಯ ವಿಂಗಡಣೆ ಈ ಕೆಳಗಿನಂತಿದೆ:

   ಮೊದಲನೇ ತ್ರೈಮಾಸಿಕ - 35%

   ಎರಡನೇ ತ್ರೈಮಾಸಿಕ - 30%

   ಮೂರನೇ ತ್ರೈಮಾಸಿಕ - 35%
3. ಘಟಕ ಮೌಲ್ಯಮಾಪನಕ್ಕೆ ನೀಲಿ ನಕ್ಷೆಯನ್ನು ತಯಾರಿಸಬೇಕಾದ ಅವಶ್ಯಕತೆ ಇ ಲ್ಲ. ಘಟಕ ಪರೀಕ್ಷೆಯ ಪ್ರಶ್ನೆ ಪತ್ರಿಕೆ ಮತ್ತು ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳುಳ್ಳ ಒಂದು ಪುಸ್ತಕ ದಾಖಲೆಯಾಗಿದ್ದರೆ ಸಾಕು. ಮೌಖಿಕವಾಗಿದ್ದರೆ ಶಿಕ್ಷಕರ ಅಭಿಪ್ರಾಯದ ದಾಖಲೆಯನ್ನು ಇ ಡತಕ್ಕದ್ದು.
4. ತ್ರೈಮಾಸಿಕ ಪರೀಕ್ಷೆಗಳ ಪ್ರಶ್ನೆಪತ್ರಿಕೆಯನ್ನು ನೀಲನಕ್ಷೆಯ ಆಧಾರದ ಮೇರೆಗೆ ಕಡ್ಡಾಯವಾಗಿ ಶಾಲಾ ಮಟ್ಟದಲ್ಲಿ ತಯಾರಿಸತಕ್ಕದ್ದು.
5. 5ನೇ ತರಗತಿಯಲ್ಲಿ ಹೊಸದಾಗಿ ಕಲಿಯುವ ದ್ವಿತೀಯ ಭಾಷೆಯಾದ ಆಂಗ್ಲ ಭಾಷೆ ಹಾಗೂ 6ನೇ ತರಗತಿಯಲ್ಲಿ ಹೊಸದಾಗಿ ಕಲಿಯುವ ತೃತೀಯ ಭಾಷೆಗಳಲ್ಲಿ ಪ್ರಥಮ ತ್ರೈಮಾಸಿಕ ಪರೀಕ್ಷೆ 40% ಮೌಖಿಕ ಹಾಗೂ 10% ಲಿಖಿತ ಪರೀಕ್ಷೆ ಮಾಡಲು ಅವಕಾಶ ಕಲ್ಪಿಸತಕ್ಕದ್ದು.
6. ಶ್ರೇಣಿಗಳಲ್ಲಿ 90% ರಿಂದ 100% ಪಡೆಯುವ ವಿದ್ಯಾರ್ಥಿಗಳಿಗೆ A+(ಅತಿಶ್ರೇಷ್ಠ) ಶ್ರೇಣಿ ಮೌಲ್ಯ-6ನ್ನು ಶ್ರೇಣೀಕರಣದಲ್ಲಿ ಸೇರಿಸತಕ್ಕದ್ದು.
7. ಫಲಿತಾಂಶ ಪ್ರಕಟಣೆಯ ಸ್ಪಷ್ಟೀಕರಣವನ್ನು ನೀಡತಕ್ಕದ್ದು.
8. ವಿದ್ಯಾರ್ಥಿವೇತನ, ಬಹುಮಾನ ಇ ತ್ಯಾದಿಗಳಿಗೆ ಆಯ್ಕೆ ಮಾಡಬೇಕಾದ ಸಂದರ್ಭದಲ್ಲಿ ಶ್ರೇಣಿ ಬಿಂದು ಸರಾಸರಿ ಕ್ರಮವನ್ನು ಅನುಸರಿಸುವುದು. B ವಿಭಾಗದಲ್ಲಿ ಚಟುವಟಿಕೆ ಮತ್ತು ವೀಕ್ಷಣೆಯ ಆಧಾರದಿಂದ ಮೌಲ್ಯಮಾಪನ ಮಾಡತಕ್ಕದ್ದು.
9. ವಿದ್ಯಾರ್ಥಿ ತೇರ್ಗಡೆಗೆ ಆ ವಿದ್ಯಾರ್ಥಿ ಶಾಲಾ ಕೆಲಸದ ದಿನಗಳಲ್ಲಿ ಕನಿಷ್ಠ 75% ಹಾಜರಾತಿಯನ್ನು ಪಡೆದಿರಬೇಕು. ಒಂದು ವೇಳೆ ಶಾಲೆಗೆ ಇ ಲಾಖೆಯ ಅನುಮತಿಯಿಂದ ತಡವಾಗಿ ಸೇರಿದ್ದಲ್ಲಿ, ಆ ವಿದ್ಯಾರ್ಥಿಯ ದಾಖಲಾತಿಯಾದ ದಿನದಿಂದ ಲೆಕ್ಕಾಚಾರ ಮಾಡಿ ಆ ದಿನಗಳಲ್ಲಿ 75% ಹಾಜರಾತಿಯನ್ನು ಲೆಕ್ಕಹಾಕುವುದು. ಯಾವುದೇ ವಿದ್ಯಾರ್ಥಿ ಅನಾರೋಗ್ಯ ಅಥವಾ ಯಾವುದೇ ಅಧಿಕೃತ ಕಾರಣಗಳಿಂದ ಶಾಲೆಯ ಹಾಜರಾತಿ ಕೊರತೆಯಾದಲ್ಲಿ ಶಾಲೆಯ ಮುಖ್ಯೋಪಾಧ್ಯಾಯರು ಕಾರಣವನ್ನು ಪರಿಶೀಲಿಸಿ 30 ದಿನಗಳ ವರೆಗೆ ಆ ಕೊರತೆಯನ್ನು ಮನ್ನಾ ಮಾಡಬಹುದು.

5 ರಿಂದ 8ನೇ ತರಗತಿವರೆಗೆ ವಿದ್ಯಾರ್ಥಿಗಳು ಅನೇಕ ಯೋಜನೆಗಳಲ್ಲಿ ತಡವಾಗಿ ಶಾಲೆಗೆ ದಾಖಲೆಯಾಗುವುದರಿಂದ, ಅವರು ಶಾಲೆಗೆ ದಾಖಲಾದ ದಿನಾಂಕದಿಂದ ಹಾಜರಾತಿಯನ್ನು ಪರಿಗಣಿಸಿ ಅವರಿಗೆ ಅಗತ್ಯವಿದ್ದಲ್ಲಿ ವಿಶೇಷ ಪರೀಕ್ಷೆಗಳನ್ನು ನಡೆಸುವುದು. ಒಟ್ಟಾರೆ ಅವರು ಎರಡು C+ ಪಡೆದರೆ ಮಾತ್ರ ಉತ್ತೀರ್ಣರೆಂದು ಪರಿಗಣಿಸತಕ್ಕದ್ದು.

10. ಪ್ರಗತಿ ಪತ್ರದಲ್ಲಿ ವಿಷಯವಾರು ಸರಾಸರಿ ಶ್ರೇಣಿ ಹಾಗೂ ತ್ರೈಮಾಸಿಕ ಸರಾಸರಿ ಶ್ರೇಣಿ ಅಂಕಣಗಳನ್ನು ಕೈಬಿಡಲಾಗಿದೆ. ಅತ್ಯುತ್ತಮ ಸಾಧನೆ ಎಂಬ ಅಂಕಣದಲ್ಲಿ ವಿದ್ಯಾರ್ಥಿಯು ವರ್ಷದಲ್ಲಿ ಸಾಧಿಸಿದ ವಿಶೇಷ ಸಾಧನೆಯನ್ನು (ಪರೀಕ್ಷೆಯಲ್ಲಿ ಹಾಗೂ ಭಾಷಣ, ಅಭಿನಯ, ಕ್ರೀಡೆ ಇ ತ್ಯಾದಿಗಳಲ್ಲಿ ಸಾಧಿಸಿದ ಸಾಧನೆಗಳು) ನಮೂದಿಸತಕ್ಕದ್ದು.
11. 5 ರಿಂದ 9ನೇ ತರಗತಿ ತ್ರೈಮಾಸಿಕ ಮೌಲ್ಯಮಾಪನದ ಕ್ರೋಢೀಕೃತ ಅಂಕ ಶ್ರೇಣಿ ವಹಿಯಲ್ಲಿ A ಮತ್ತು B ವಿಭಾಗಗಳ ಪ್ರತಿ ವಿಷಯಗಳ ಸರಾಸರಿ ಅಂಕಣವನ್ನು ಹಾಗೂ ಕೊನೆಯಲ್ಲಿರುವ ಒಟ್ಟು ಎಂಬ ಅಂಕಣದಲ್ಲಿ ಬರುವ ಒಟ್ಟು (300/250;%;ಶ್ರೇಣಿ) ಮೂರು ಕಾಲಂಗಳನ್ನು ಕೈಬಿಡಲಾಗಿದೆ.
12. ಹತ್ತನೇ ತರಗತಿ ಪಬ್ಲಿಕ್ ಪರೀಕ್ಷೆಯಲ್ಲಿ ಪ್ರತಿ ವಿಷಯದಲ್ಲಿ ಎರಡು ಭಾಗಗಳಿರುತ್ತದೆ. ಮೊದಲಿನ ಭಾಗವು ವಸ್ತುನಿಷ್ಠ (ಬಹು ಆಯ್ಕೆ) ಪ್ರಶ್ನೆಗಳನ್ನು ಹೊಂದಿರುತ್ತದೆ. ಎರಡನೇ ಭಾಗವು ವಿವರಣಾತ್ಮಕ ಪ್ರಶ್ನೆಗಳನ್ನೊಳಗೊಂಡಿರುತ್ತದೆ. ಅಂಕ ವಿತರಣೆ ಭಾಷೆಗಳಲ್ಲಿ ಭಾಗ 50 ಒಂದು ಮತ್ತು ಭಾಗ ಎರಡು 50 ಶೇಕಡಾ ಅಂಕಗಳು ಹಾಗೂ ಕೋರ್ ವಿಷಯಗಳಲ್ಲಿ 60 ಮತ್ತು 40 ಶೇಕಡ ಅಂಕಗಳಿರುತ್ತವೆ.
13. ಖಾಸಗಿಯಾಗಿ ವಿದ್ಯಾರ್ಥಿಗಳನ್ನು 6,7 ಮತ್ತು 8ನೇ ತರಗತಿಗಳಿಗೆ ಪರೀಕ್ಷೆಗೆ ದಾಖಲಿಸಿಕೊಳ್ಳಬಹುದು. ವಯೋಮಿತಿ 6ನೇ ತರಗತಿಗೆ 11 ವರ್ಷ, 7ನೇ ತರಗತಿಗೆ 12 ವರ್ಷ, 8ನೇ ತರಗತಿಗೆ 13 ವರ್ಷ ಪೂರ್ತಿಯಾಗಿರಬೇಕು. ಈ ವಿದ್ಯಾರ್ಥಿಗಳು ಮೊದಲನೇ ತ್ರೈಮಾಸಿಕ ಪರೀಕ್ಷೆಗೆ ಒಂದು ವಾರ ಮುಂಚಿತವಾಗಿ ನೋಂದಣಿ ಮಾಡಿಸಿಕೊಳ್ಳುವುದು. ಅವರು ಪ್ರತಿ ತ್ರೈಮಾಸಿಕ ಪರೀಕ್ಷೆಯ ವೇಳಾಪಟ್ಟಿಗೆ ಅನುಗುಣವಾಗಿ ಹಾಜರಾಗಬೇಕು. ಈ ವಿದ್ಯಾರ್ಥಿಗಳಿಗೆ ಹಾಜರಾತಿ ಅವಶ್ಯಕತೆ ಇ ಲ್ಲ. ಇ ವರಿಗೆ ಭಾಗ-B ಕಡ್ಡಾಯ ಇ ಲ್ಲ.
14. ಪ್ರತಿ ತ್ರೈಮಾಸಿಕ ಅವಧಿಯ ನಂತರ ಸರ್ಕಾರಿ ಆದೇಶದಂತೆ ರಜೆ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1445

**ಸ್ವರ್ಣಲತ ಎಂ.ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇ ಲಾಖೆ. (ಸೇ-1,2)

## CO-OPERATION SECRETARIAT

**Subject:** Promoting National Dairy Development Board model of three tier structure of Horticulture Produce Marketing and Processing Cooperatives under the National Horticulture Mission.

**Read:**
1. D.O. letter No.7-2/2004-Coord(Hort) dated:28th February 2005 of the Secretary to Government of India, Department of Agriculture & Cooperation, Ministry of Agriculture, addressed to the Chief Secretaries of States.
2. Government Order No. AHD 99 HPP 2005, Bangalore, dated: 16.06.2005.
3. Letter No.Fno.33-15/2005-Hort. Dated:23.06.2005 of Department of Agriculture and Cooperation (Horticulture Division), Ministry of Agriculture, Government of India.

**Preamble:**

In the letter cited at Sl.No.1 above, the Government of India had intimated that the scheme of National Horticulture Mission under which assistance for difference activities in the areas of research, production, post harvesting management, processing and marketing would flow to the States was in the final stages of completion within the Government of India and in the meantime the preparatory action to be undertaken by the States was required to be firmed up so that the implementation could begin in right earnest on the approval of the scheme by the Government of India.

It was further stated that a State Level Registered Society, as advised earlier, will provide for integrated end-to-end approach in planning and implementation and will also act as nodal point for receiving funds from the Center. There would be flexibility to the States wherein there could be cooperative federation on the pattern of National Dairy Development Board (NDDB) or incorporated companies or mixed models.

The Government of Karnataka has set up "Karnataka State Horticulture Mission Agency" under Karnataka Societies Registration Act 1960 vide Government Order referred to at Sl.No.2 above.

Government of India, vide the letter referred to at Sl.No.3 above, have conveyed approval of Government of India to the implementation of new Centrally Sponsored Scheme on National Horticulture Mission during the remaining two years of 10th plan. Government of India have also conveyed the administrative approval to the implementation of the scheme in the country with an outlay of Rs.630 crore during the year 2005-06 on the pattern of assistance and components etc. included in the operational guidelines enclosed with the letter. The strategy to achieve the objectives of the mission includes, inter alia, promotion of National Dairy Development Board (NDDB) model of cooperatives, where appropriate and feasible, to ensure support and adequate returns to the farmers.

The Karnataka State Horticulture Mission Agency set up vide Government order referred to at Sl.No.2 above while implementing the National Horticulture Mission in the State of Karnataka, may be assigning certain activities to the Cooperative sector and therefore it is considered necessary to strengthen the cooperative structure in horticulture sector. The NDDB pattern envisages a three tier structure of (a) Primary Cooperative Societies at the Village Level or Taluk Level, (b) Unions of Primary Cooperatives at the District Level, and (c) State Cooperative Federation at the State Level.

At Present, in Karnataka, there is Karnataka State Cooperative Horticulture Federation at State Level and there are 17 Horticulture Produce Marketing and Processing Cooperative Societies at the District Level. There are also some Cooperatives Societies identified with particular produce such as Grape Growers' Societies.. There is need to promote Horticulture Produce Marketing and Processing Cooperative at the Village/Taluk Level. Hence it is necessary that all out efforts be made to strengthen the cooperatives in the Horticulture Sector on the NDDB model. Hence the following:

**Government Order No: CD 94 PMC 2005, Bangalore, Dated:04th October 2005**

Karnataka State Horticulture Mission Agency set up under the Government Order NO.AHD 99 HPP 2005, Bangalore, dated:16.06.2005 and the Karnataka State Cooperative Horticulture Federation shall take necessary action to promote, develop and strengthen three tier structure of Horticulture Produce Marketing and Processing Cooperatives in the State on the NDDB model of Cooperatives for the purpose of taking up such of the activities as may be assigned from time to time by the Karnataka State Horticulture Mission Agency.

By order and in the name of the Governor of Karnataka

P.R. 1459

**SURPURKAR VENKATESH**

Under Secretary to Government, Co-operation Department.

**ಕಂದಾಯ ಸಚಿವಾಲಯ**

**ವಿಷಯ:–** ನವೋದಯ ವಿದ್ಯಾ ಸಂಘ (ರಿ), ಚನ್ನರಾಯಪಟ್ಟಣ, ಈ ಸಂಘಕ್ಕೆ ನೇಮಕವಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 48 ಮುನೊಸೊ 2000, ದಿನಾಂಕ:16–06–2001.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 57 ಮುನೊಸೊ 2003, ದಿನಾಂಕ:04–06–2005.
3. ಆಡಳಿತಾಧಿಕಾರಿ ನವೋದಯ ವಿದ್ಯಾ ಸಂಘ (ರಿ) ರವರ ಪತ್ರ ಸಂಖ್ಯೆ:ನವಿಸ/ಚ.ರಾ.ಪ/ಆಅವಿ/2005–06, ದಿನಾಂಕ:28–07–2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ನವೋದಯ ವಿದ್ಯಾ ಸಂಸ್ಥೆ (ರಿ) ಚನ್ನರಾಯಪಟ್ಟಣ, ಈ ಸಂಘಕ್ಕೆ ಸಂಘದ ಹಿತದೃಷ್ಟಿಯಿಂದ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–3 ರ ಪ್ರಕಾರ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ತದನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದ್ದು, ಮೇಲೆ ಓದಲಾದ (2) ರ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯು ದಿನಾಂಕ:15–06–2005 ಕ್ಕೆ ಮುಕ್ತಾಯಗೊಂಡಿರುತ್ತದೆ. ಮೇಲೆ ಓದಲಾದ (3) ರಲ್ಲಿ ಸಂಘದ ಆಡಳಿತಾಧಿಕಾರಿಯವರು ನೀಡಿರುವ ವರದಿಯನ್ನು ಸರ್ಕಾರವು ಪರಿಶೀಲಿಸಿದ್ದು, ದಿನಾಂಕ:16–06–2005 ರಿಂದ ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 57 ಮುನೊಸೊ 2003, ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ ರ ಪ್ರಕಾರ ನವೋದಯ ವಿದ್ಯಾ ಸಂಸ್ಥೆ (ರಿ), ಚನ್ನರಾಯಪಟ್ಟಣ, ಈ ಸಂಘಕ್ಕೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:16–06–2005 ರಿಂದ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ಈ ವಿಸ್ತರಿಸಿದ ಅವಧಿಯೊಳಗೆ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಕಡ್ಡಾಯವಾಗಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಲು ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1529

**ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:-** ಶ್ರೀ ಕೆ. ತಿಮ್ಮಪ್ಪ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇ ಲಾಖೆ, ಚಾಮರಾಜನಗರ ಇ ವರ ಮೇಲಿನ ಲೋಕಾಯುಕ್ತ ಟ್ರ್ಯಾಪ್ ಪ್ರಕರಣ.

**ಓದಲಾಗಿದೆ:-** ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇ ಲಾಖೆ ಇ ವರ ಪತ್ರ ಸಂಖ್ಯೆ:ಗಭೂಇ .ಸಿಬ್ಬಂದಿ.ಅ.3: 2005-06:1909 ದಿನಾಂಕ:17.09.2005.

**ಪ್ರಸ್ತಾವನೆ:**

ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇ ಲಾಖೆ ಇ ವರು ಮೇಲೆ ಓದಲಾದ ಪತ್ರದಲ್ಲಿ, ಶ್ರೀ ಕೆ.ತಿಮ್ಮಪ್ಪ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇ ಲಾಖೆ, ಚಾಮರಾಜನಗರ ಇ ವರ ವಿರುದ್ಧ ಲಂಚ ನಿರೋಧಕ ಕಾಯ್ದೆಯಡಿಯಲ್ಲಿ ಕ್ರಿಮಿನಲ್ ಪ್ರಕರಣ ದಾಖಲಾಗಿರುವುದಾಗಿ ಪೋಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಮೈಸೂರು ಇ ವರು ದಿನಾಂಕ:14.09.2005ರ ಪತ್ರದಲ್ಲಿ ಈ ಕೆಳಗಿನಂತೆ ವರದಿ ನೀಡಿರುತ್ತಾರೆಂದು ತಿಳಿಸಿರುತ್ತಾರೆ.

ಶ್ರೀ ನಜೀರ್ ಅಹಮದ್, ಮಾಲೀಕರು, ಎ.ಎಂ.ಎಫ್.ಗ್ರಾನೈಟ್ಸ್ ಕಂಪೆನಿ, ಚಾಮರಾಜ ನಗರ ಇ ವರು ಕೊತ್ತಲವಾಡಿ ಗ್ರಾಮದಲ್ಲಿ ಇ ರುವ ಕ್ವಾರಿಯಿಂದ ಗ್ರಾನೈಟ್ ಅನ್ನು ಸಾಗಾಣಿಕೆ ಮಾಡಲು ಪರವಾನಿಗೆ ನೀಡಬೇಕೆಂದು ಕೋರಿ ಅರ್ಜಿ ಸಲ್ಲಿಸಿದ್ದು, ಪರವಾನಗಿ ನೀಡಲು ರೂ. 20,000.00 ಲಂಚ ನೀಡಬೇಕೆಂದು ಶ್ರೀ ಕೆ.ತಿಮ್ಮಪ್ಪ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇ ಲಾಖೆ, ಚಾಮರಾಜನಗರ ಇ ವರು ಒತ್ತಾಯಿಸಿದ್ದು, ಲಂಚ ನೀಡಿ ಕೆಲಸ ಮಾಡಿಸಿ ಕೊಳ್ಳಲು ಇ ಚ್ಛೆಯಿಲ್ಲದ ಪ್ರಯುಕ್ತ, ಅರ್ಜಿದಾರರು, ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ ಇ ವರನ್ನು ಸಂಪರ್ಕಿಸಿ, ದೂರು ನೀಡಿದ್ದರ ಮೇರೆಗೆ, ಅದರಂತೆ ಲಂಚ ನಿರೋಧಕ ಕಾಯ್ದೆ, 1988ರಡಿ ಪ್ರಕರಣ ಸಂಖ್ಯೆ:6:2005ಅನ್ನು ದಾಖಲು ಮಾಡಿ ಟ್ರ್ಯಾಪ್ ಏರ್ಪಡಿಸಲಾಗಿದ್ದು, ಅದರಂತೆ ದಿನಾಂಕ:13.09.2005ರಂದು ಅರ್ಜಿದಾರರಿಂದ ರೂ.20,000.00ಗಳ ಲಂಚ ಪಡೆಯುತ್ತಿದ್ದಾಗ ಆರೋಪಿಯನ್ನು ಲಂಚದ ಹಣ ಸಮೇತ ಬಂಧಿಸಿರುವುದಾಗಿಯೂ ಹಾಗೂ ಹಣವನ್ನು ವಶಪಡಿಸಿಕೊಂಡು ತನಿಖೆ ಮುಂದುವರಿಸಿರುವುದಾಗಿಯೂ, ಆರೋಪಿತರನ್ನು ದಸ್ತಗಿರಿ ಕ್ರಮದ ನಂತರ ನ್ಯಾಯಾಲಯಕ್ಕೆ ರಿಮ್ಯಾಂಡ್ ಅರ್ಜಿಯೊಂದಿಗೆ ಹಾಜರುಪಡಿಸಿದಾಗ, ದಿನಾಂಕ: 14.09.2005ರಂದು ಜಾಮೀನಿನ ಮೇಲೆ ಬಿಡುಗಡೆ ಮಾಡಿರುವುದಾಗಿ ತಿಳಿಸಿರುತ್ತಾರೆ.

ಮೇಲಿನ ವರದಿ ಮೇರೆಗೆ ಶ್ರೀ ಕೆ.ತಿಮ್ಮಪ್ಪ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇ ಲಾಖೆ, ಚಾಮರಾಜನಗರ ಇ ವರು ಲಂಚ ನಿರೋಧಕ ಕಾಯ್ದೆ, 1988ರ ಕಲಂ-7, 13(1) (ಡಿ) ಜೊತೆಯಲ್ಲಿ ಓದಲಾದ 13(2)ರಡಿಯಲ್ಲಿ ಮೇಲ್ನೋಟಕ್ಕೆ ಅಪರಾಧ ಎಸಗಿರುವುದಾಗಿ ಕಂಡುಬಂದಿರುವುದರಿಂದ, ಸದರಿ ಅಧಿಕಾರಿಯವರ ವಿರುದ್ಧ ಕೆ.ಸಿ.ಎಸ್.(ಸಿ.ಸಿ.ಎ.)ನಿಯಮಾವಳಿ, 1957ರ ನಿಯಮ 10(1)(ಎ)ರನುಸಾರ ಸದರಿ ಆಪಾದಿತ ಅಧಿಕಾರಿಯವರ ವಿರುದ್ಧ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ ತಕ್ಷಣ ಅಮಾನತುಗೊಳಿಸಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇ ಲಾಖೆ ಇ ವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ.92:ಎಂಜಿಎಸ್.2005, ಬೆಂಗಳೂರು, ದಿನಾಂಕ: 09ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಸನ್ನಿವೇಶಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಎ) ಮತ್ತು (ಬಿ)ರನ್ವಯ ಪ್ರದತ್ತವಾದ ಅಧಿಕಾರದನ್ವಯ, ಶ್ರೀ ಕೆ.ತಿಮ್ಮಪ್ಪ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇ ಲಾಖೆ, ಚಾಮರಾಜನಗರ ಇ ವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇ ಲಾಖಾ ವಿಚಾರಣೆ:ಕ್ರಿಮಿನಲ್ ಮೊಕದ್ದಮೆಯನ್ನು ಕಾಯ್ದಿರಿಸಿ, ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಕೆ.ತಿಮ್ಮಪ್ಪ ಇ ವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ತಿಮ್ಮಪ್ಪ ಇ ವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಗದೀಶ್ ಜೋಯಿಸ್**

ಪಿ.ಆರ್. 1596 ಸರ್ಕಾರದ ಅಧೀನ ಕಾರ್ಯದರ್ಶಿ(ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇ ಲಾಖೆ.

## ENERGY SECRETARIAT

**Sub:** Enhancement of allotted capacity of Wind Power Project from 15 M.W. to 23.2 M.W. by M/s Enercon (I) Limited, - orders relating to.

**Read:** 1. Government Order No : DE 241 NCE 2001, dated : 19.6.2002.
2. Letter No : KRED / 08 / EIL-20 / 2005 / 1931, dated : 20.10.2005 received from the Managing Director, Karnataka Renewable Energy Development Limited, Bangalore.

**PREAMBLE** :

In the Government order read at (1) above, the sanction has been accorded to implement 15 M.W. capacity Wind Power Project at Gadag District to M/s Enercon (I) Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, has recommended to Government to enhance the capacity from 15 M.W. to 23.2 M.W. vide his letter read at (2) above.

The proposal has been examined and pass the following order :

**Government Order No : EN 320 NCE 2005, Bangalore, Dated: 25th October 2005**

Government is pleased to accord sanction to M/s Enercon (I) Limited, for enhancement of the capacity of Wind Power Project from 15 M.W. to 23.2 M.W at Singatalur village, Gadag District (ಶಿಂಗಟಲೂರು ಗ್ರಾಮದ ಆಗ್ನೇಯ ಕಣಿವೆಯ ವಾಯುವ್ಯ ಹಾಗೂ ನೈರುತ್ಯ ಭಾಗದಲ್ಲಿ 822,783 ಮತ್ತು 781 ಮೀಟರು ಶಿಖರವನ್ನೊಳಗೊಂಡಿದೆ).

The other terms and conditions of the allotment order shall continue as it is.

By Order and in the Name of the Governor of Karnataka.

P.R. 1556 **Suresh.B.Krishnappanavar**

Under Secretary to Government, Energy Department.

**Sub:** Transfer of 1.6 M.W. Wind Power Capacity in favour of M/s Panama Business Centre - orders relating to.

**Read:** 1. Government Order No : DE 26 NCE 99, dated : 13.5.1999.
2. Government order No : EN 76 NCE 05, dated : 18.3.2005.
3. Letter No : KRED/08/ PBC / 2005 / 1932, dated : 20.10.2005 received from the Managing Director, Karnataka Renewable Energy Development Limited, Bangalore.

**PREAMBLE** :

In the Government Order dated : 18.3.2005 read at (2) above, sanction has been accorded for implementation of 192 M.W. capacity Wind Power Project at Chitradurga District to M/s Enercon (I) Limited.

Now, the Managing Director, Karnataka Renewable Energy Development Limited, Bangalore, in his letter dated : 20.10.2005 read at (3) above, has recommended to the Government for transfer of 1.6 M.W. Wind Power capacity in favour of M/s Panama Business Centre at Lingadevarahalli, Hiriyur Taluk, Chitradurga district, from out of the sanctioned 192 M.W. capacity of M/s Enercon (I) Limited.

The proposal has been examined and pass the following order :

**Government Order No: EN 327 NCE 2005, Bangalore, Dated : 25th October 2005**

Government is pleased to accord sanction for transfer of 1.6 M.W. Wind Power capacity in favour of M/s Panama Business Centre, at Lingadevarahalli, Hiriyur Taluk, Chitradurga district, from out of 192 M.W. capacity of M/s Enercon (I) Limited, allotted in the Government order dated 18.3.2005.

